# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 813 |
| ಸದಸ್ಯರ ಹೆಸರು | : | ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 14.12.2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | 2019-20ನೇ ಸಾಲಿನ ಆಯ-ವ್ಯಯ ಭಾಷಣದಲ್ಲಿ ಮುಖ್ಯ ಮಂತ್ರಿಗಳು ಘೋಷಿಸಿದಂತೆ, 1000 ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ರಾಜ್ಯದ ಹೋಬಳಿ ಕೇಂದ್ರದಲ್ಲಿ ಸ್ಥಾಪಿಸಲಾಗಿದೆಯೇ: ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು: | ಹೌದು<br>ಸರ್ಕಾರದ ಆದೇಶ ಸಂಖ್ಯೆ:ಇಡಿ 04 ಯೋಸಕ 2017, ದಿನಾಂಕ:05.01.2018 ರಲ್ಲಿ, ರಾಜ್ಯದಲ್ಲಿ, 176 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮಂಜೂರಾತಿ ನೀಡಲಾಗಿರುತ್ತದೆ.<br>ಹಾಗೂ ಸರ್ಕಾರದ ಆದೇಶ ಸಂಖ್ಯೆ:ಇಡಿ 230 ಯೋಸಕ 2018, ದಿನಾಂಕ:18.05.2019 ರಲ್ಲಿ, 100 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮಂಜೂರಾತಿ ನೀಡಲಾಗಿರುತ್ತದೆ.<br>ಪ್ರಥಮ ಹಂತದಲ್ಲಿ ಒಟ್ಟು 276 ಕರ್ನಾಟಕ ಪಬ್ಲಿಕ್ ಶಾಲೆಗಳನ್ನು (ಕೆಪಿಎಸ್) ರಾಜ್ಯಾದ್ಯಂತ ಪ್ರಾರಂಭಿಸಲಾಗಿದೆ. **(ಜಿಲ್ಲಾವಾರು ಶಾಲೆಗಳ ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ)**<br>ಉಳಿದ ಕೆ.ಪಿ.ಎಸ್.ಶಾಲೆಗಳನ್ನು ಹಂತ ಹಂತವಾಗಿ ಪ್ರಾರಂಭಿಸಲು ಕ್ರಮವಹಿಸಲಾಗುತ್ತದೆ. |
| ಆ) | ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಶಾಲಾ ಪ್ರವೇಶವನ್ನು ಶಿಶುವಿಹಾರದಿಂದ (Lower Kindergarten) ಪ್ರಾರಂಭಿಸಿ. 12ನೇ ತರಗತಿಯವರೆಗೆ ಶಾಲೆಗಳನ್ನು ನಡೆಸಲು ತೆರೆಯಲಾಗಿದೆಯೇ: (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಇಡಿ 111 ಯೋಯೋಕ 2018, ದಿನಾಂಕ:17.05.2019 ರಂತೆ ರಾಜ್ಯದಲ್ಲಿ ಈಗಾಗಲೇ ಪ್ರಾರಂಭಿಸಿರುವ 276 ಕೆಪಿಎಸ್ ಶಾಲೆಗಳಲ್ಲಿ 2019-20ನೇ ಶೈಕ್ಷಣಿಕ ಸಾಲಿನಿಂದ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಿ 12ನೇ ತರಗತಿವರೆಗೂ ಶಿಕ್ಷಣವನ್ನು ನೀಡಲಾಗುತ್ತಿದೆ. (ಆದೇಶದ ಪ್ರತಿಯನ್ನು **ಅನುಬಂಧ-2**ರಲ್ಲಿ ಒದಗಿಸಿದೆ) |

| | | |
|---|---|---|
| ಇ) | ಸರ್ಕಾರ ಘೋಷಿಸಿದಂತೆ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮಗಳಲ್ಲಿ ವಿದ್ಯಾರ್ಥಿಗಳ ಪ್ರವೇಶ ಹೆಚ್ಚಳವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಹೋಬಳಿ ಮಟ್ಟದಲ್ಲಿ ಪ್ರಾರಂಭಿಸಿರುವುದರಿಂದ ಸದರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ಪ್ರವೇಶ ಹೆಚ್ಚಳವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಉ) | ಹಾಗಿದ್ದಲ್ಲಿ, ರಾಜ್ಯ ಸರ್ಕಾರ ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಗ್ರಾಮ ಪಂಚಾಯತ್ ಕೇಂದ್ರಗಳಲ್ಲಿ ಮತ್ತು ಇತರೆ ಪ್ರಮುಖ ಪಟ್ಟಣಗಳ ಕೇಂದ್ರಗಳಲ್ಲಿ ತೆರೆಯಲು ಹೊಂದಿರುವ ಯೋಜನೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಪ್ರಥಮ ಹಂತದಲ್ಲಿ ಕೆಪಿಎಸ್ ಶಾಲೆಗಳನ್ನು ಹೋಬಳಿಗೆ ಒಂದು ಶಾಲೆಯಂತೆ ಸ್ಥಾಪಿಸಲು ಉದ್ದೇಶಿಸಿಲಾಗಿದೆ.<br><br>ಸರ್ಕಾರಿ ಶಾಲೆಗಳಲ್ಲಿ ಕೆಪಿಎಸ್ ಶಾಲೆ ಪ್ರಾರಂಭ ಮಾಡಲು ಈ ಕೆಳಕಂಡ ಮಾನದಂಡಗಳನ್ನು ನಿಗದಿಪಡಿಸಿದೆ.<br><br>1. ಹಂತ–ಹಂತವಾಗಿ ಪ್ರತಿ ಹೋಬಳಿಗೆ ಒಂದು ಕೆಪಿಎಸ್ ಬರುವಂತೆ ಶಾಲೆಗಳನ್ನು ಆಯ್ಕೆ ಮಾಡುಲಾಗುವುದು.<br>2. ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆ, ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳಿಗೆ ಪ್ರಥಮ ಆದ್ಯತೆ ನೀಡಲಾಗುವುದು.<br>3. ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸದಿರುವ ಆದರೆ ಅದೇ ಗ್ರಾಮ/ಪಟ್ಟಣ/ನಗರದಲ್ಲಿ ಸಮೀಪದಲ್ಲಿ ಕಾರ್ಯನಿರ್ವಹಿಸುವ ಸರ್ಕಾರಿ ಪ್ರಾಥಮಿಕ ಶಾಲೆ, ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳನ್ನು ಆಯ್ಕೆ ಮಾಡಲಾಗುವುದು.<br>4. ಕ್ರಸಂ 2 ಮತ್ತು 3 ರಂತೆ ಶಾಲೆಗಳು ಲಭ್ಯವಿಲ್ಲದಿದ್ದಲ್ಲಿ, ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆ ಮತ್ತು |

| | | |
|---|---|---|
| | | ಸರ್ಕಾರಿ ಪ್ರೌಢಶಾಲೆಯನ್ನು ಆಯ್ಕೆಗೆ ಪರಿಗಣಿಸಲಾಗುವುದು.<br>5. ಜಿಲ್ಲಾ ವ್ಯಾಪ್ತಿಯಲ್ಲಿನ ಎಲ್ಲಾ ವಿಧಾನ ಸಭಾ ಕ್ಷೇತ್ರಗಳಲ್ಲೂ ಕೆಪಿಎಸ್ ಶಾಲೆ ಇರುವಂತೆ ಶಾಲೆಗಳನ್ನು ಆಯ್ಕೆ ಮಾಡಲಾಗುವುದು.<br>6. ವಿದ್ಯಾರ್ಥಿಗಳ ದಾಖಲಾತಿ ಹೆಚ್ಚಾಗಿರುವ ಮತ್ತು ಸಾಕಷ್ಟು ಕೊಠಡಿಗಳನ್ನು ಹೊಂದಿರುವ ಶಾಲೆಗಳನ್ನು ಆದ್ಯತಾನುಸಾರ ಪರಿಗಣಿಸಲಾಗುವುದು.<br>ನಗರ ಪ್ರದೇಶದಲ್ಲಿ ಸೂಕ್ತ ಸ್ಥಳಾವಕಾಶ/ಆವರಣವನ್ನು ಹೊಂದಿರುವ ಶಾಲೆಗಳು ಮತ್ತು ಗ್ರಾಮ/ಪಟ್ಟಣ ಪ್ರದೇಶಗಳಲ್ಲಿ ಕನಿಷ್ಠ 3–5 ಎಕರೆ ಜಾಗವನ್ನು ಹೊಂದಿರುವ ಶಾಲೆಗಳನ್ನು ಆದ್ಯತಾನುಸಾರ ಪರಿಗಣಿಸಲಾಗುವುದು. |

**ಇಪಿ: 236 ಯೋಸಕ 2020**

(ಎಸ್.ಸುರೇಶ್ ಕುಮಾರ್)

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

ಪ್ರ.ಸಂ. 813 ಅನುಬಂಧ-1

ಕರ್ನಾಟಕ ಸರ್ಕಾರ 2018-19 ಮತ್ತು 2019-20 ನೇ ಸಾಲುಗಳಲ್ಲಿ ಪ್ರಾರಂಭಿಸಿರುವ 276 ಕೆ.ಪಿ.ಎಸ್ ಶಾಲೆಗಳ ಪಟ್ಟಿ

ಅನುಬಂಧ-01

| ಕ್ರಸಂ | ಜಿಲ್ಲೆಯ ಹೆಸರು | 2018-19ನೇ ಸಾಲಿನಲ್ಲಿ ಪ್ರಾರಂಭಿಸಿದ 176 ಕೆ.ಪಿ.ಎಸ್ ಶಾಲೆಗಳು | | | | 2019-20ನೇ ಸಾಲಿನಲ್ಲಿ ಪ್ರಾರಂಭಿಸಿದ 100 ಕೆ.ಪಿ.ಎಸ್ ಶಾಲೆಗಳು | | | | KPS ಶಾಲೆಗಳ ಸಂಖ್ಯೆ |
|---|---|---|---|---|---|---|---|---|---|---|
| | | A | B | C | TOTAL | A | B | C | TOTAL | |
| 1 | ಬಾಗಲಕೋಟೆ | 03 | 03 | | 06 | 02 | | | 02 | 08 |
| 2 | ಬೆಂಗಳೂರು ಉತ್ತರ | | 01 | | 01 | 04 | 04 | 02 | 10 | 11 |
| 3 | ಬೆಂಗಳೂರು ಗ್ರಾಮಾಂತರ | | 04 | | 04 | | | | 00 | 04 |
| 4 | ಬೆಂಗಳೂರು ನಗರ | | 03 | | 03 | 09 | 05 | | 14 | 17 |
| 5 | ಬೆಳಗಾವಿ | 01 | 04 | | 05 | 02 | 01 | | 03 | 08 |
| 6 | ಬಳ್ಳಾರಿ | 02 | 05 | | 07 | 02 | | | 02 | 09 |
| 7 | ಬೀದರ್ | 05 | | | 05 | 01 | | | 01 | 06 |
| 8 | ಚಾಮರಾಜನಗರ | 01 | 03 | | 04 | | | | 00 | 04 |
| 9 | ಚಿಕ್ಕಬಳ್ಳಾಪುರ | 03 | 03 | | 06 | | | | 00 | 06 |
| 10 | ಚಿಕ್ಕೋಡಿ | 02 | 03 | | 05 | 02 | 03 | | 05 | 10 |
| 11 | ಚಿಕ್ಕಮಗಳೂರು | | 07 | | 07 | 01 | | | 01 | 08 |
| 12 | ಚಿತ್ರದುರ್ಗ | 03 | 02 | 01 | 06 | | 01 | | 01 | 07 |
| 13 | ದಕ್ಷಿಣ ಕನ್ನಡ | 02 | 03 | | 05 | 04 | | | 04 | 09 |
| 14 | ದಾವಣಗೆರೆ | 01 | 05 | | 06 | 05 | | | 05 | 11 |
| 15 | ಧಾರವಾಡ | | 05 | | 05 | 02 | 01 | | 03 | 08 |
| 16 | ಗದಗ | 02 | 03 | | 05 | 02 | | | 02 | 07 |
| 17 | ಹಾಸನ | 05 | 03 | | 08 | 02 | | | 02 | 10 |
| 18 | ಹಾವೇರಿ | 01 | 06 | | 07 | | | | 00 | 07 |
| 19 | ಕಲ್ಬುರ್ಗಿ | 04 | 03 | | 07 | 03 | | | 03 | 10 |
| 20 | ಕೊಡಗು | | 03 | | 03 | | | | 00 | 03 |
| 21 | ಕೋಲಾರ | 05 | | | 05 | 01 | 01 | | 02 | 07 |
| 22 | ಕೊಪ್ಪಳ | 02 | 02 | | 04 | 04 | | | 04 | 08 |
| 23 | ಮಧುಗಿರಿ | 01 | 03 | | 04 | 03 | | | 03 | 07 |
| 24 | ಮಂಡ್ಯ | 01 | 06 | | 07 | 02 | | | 02 | 09 |
| 25 | ಮೈಸೂರು | 03 | 04 | | 07 | 05 | | | 05 | 12 |
| 26 | ರಾಮನಗರ | 02 | 02 | | 04 | 02 | | | 02 | 06 |
| 27 | ರಾಯಚೂರು | 02 | 03 | | 05 | 04 | | | 04 | 09 |
| 28 | ಶಿರಸಿ | | 03 | | 03 | 02 | | | 02 | 05 |
| 29 | ಶಿವಮೊಗ್ಗ | 01 | 05 | 01 | 07 | 02 | 01 | | 03 | 10 |
| 30 | ತುಮಕೂರು | 01 | 05 | | 06 | 05 | | | 05 | 11 |
| 31 | ಉಡುಪಿ | 01 | 05 | | 06 | 01 | 01 | | 02 | 08 |
| 32 | ಉತ್ತರ ಕನ್ನಡ | 02 | 02 | 01 | 05 | 01 | 02 | | 03 | 08 |
| 33 | ವಿಜಯಪುರ | | 05 | | 05 | 05 | | | 05 | 10 |
| 34 | ಯಾದಗಿರಿ | 02 | 01 | | 03 | | | | 00 | 03 |
| | **Total** | 58 | 115 | 03 | 176 | 78 | 20 | 02 | 100 | 276 |

ಷರಾ:

| | |
|---|---|
| A | ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಥಮಿಕ, ಹಿರಿಯ ಪ್ರಾಥಮಿಕ, ಪ್ರೌಢಶಾಲೆ ಮತ್ತು ಪದವಿಪೂರ್ವ ಕಾಲೇಜುಗಳನ್ನು ಒಗ್ಗೂಡಿಸಿದೆ. |
| B | ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಅದೇ ಗ್ರಾಮ/ಪಟ್ಟಣ/ನಗರದಲ್ಲಿ 500 ಮೀಟರ್‌ಗಳ ಅಂತರದಲ್ಲಿರುವ ಪ್ರಾಥಮಿಕ, ಪ್ರೌಢ ಮತ್ತು ಕಾಲೇಜು ವಿಭಾಗಗಳನ್ನು ಒಗ್ಗೂಡಿಸಿದೆ. |
| C | ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸದಿದ್ದರೂ ಅದೇ ಗ್ರಾಮ/ಪಟ್ಟಣ/ನಗರದಲ್ಲಿ ಪ್ರಾಥಮಿಕ, ಹಿರಿಯ ಪ್ರಾಥಮಿಕ, ಮತ್ತು ಪ್ರೌಢಶಾಲೆ ವಿಭಾಗಗಳನ್ನು ಒಗ್ಗೂಡಿಸಿದೆ. |

ಪ್ರ.ಸಂ. 813 ಅನುಬಂಧ-2



**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಯನ್ನು ಪ್ರಾರಂಭಿಸುವ ಬಗ್ಗೆ

ಓದಲಾಗಿದೆ : 1. 2018-19ನೇ ಸಾಲಿನ ಆಯವ್ಯಯ ಘೋಷಣೆ ಕಂಡಿಕೆ 52

2. ಸರ್ಕಾರಿ ಆದೇಶ ಸಂಖ್ಯೆ: ಇಡಿ 04 ಯೋಸಕ 2017, ದಿನಾಂಕ:05.01.2018.
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 230 ಯೋಸಕ 2018, ದಿನಾಂಕ:14.05.2019
4. ದಿನಾಂಕ:15.03.2019ರಂದು ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಆಂಗ್ಲ ಮಾಧ್ಯಮ ಶಾಲೆಗಳು, ಕರ್ನಾಟಕ ಪಬ್ಲಿಕ್ ಶಾಲೆಗಳು, ಹಾಗೂ ಪೂರ್ವ ಪ್ರಾಥಮಿಕ ಶಾಲೆಗಳ ಸ್ಥಾಪನೆ ಕುರಿತ ಸಭೆಯ ನಡವಳಿ.
5. ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಅಭಿಯಾನ, ಬೆಂಗಳೂರು ಇವರ ಏಕ ಕಡತ ಸಂಖ್ಯೆ:ಎಸ್‌ಎಸ್‌ಕೆ/ಕ್ಯುಎ/ಪ್ರೀ-ಪ್ರೈಮರಿ-2019-20.

ಪ್ರಸ್ತಾವನೆ:

ಪೂರ್ವ ಪ್ರಾಥಮಿಕ ಶಿಕ್ಷಣವು ಮಕ್ಕಳ ಔಪಚಾರಿಕ ಶಿಕ್ಷಣದ ಬುನಾದಿಯಾಗಿದೆ. ರಾಜ್ಯದಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ತೆರೆಯಬೇಕೆಂದು ಪೋಷಕರ ಬೇಡಿಕೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಪೋಷಕರ ಕೋರಿಕೆಯಂತೆ ಹಲವಾರು ಸರ್ಕಾರಿ ಶಾಲೆಗಳಲ್ಲಿ "ಮಕ್ಕಳ ಮನೆ" ಎಂಬಿತ್ಯಾದಿ ಹೆಸರಿನಲ್ಲಿ ಎಸ್‌ಡಿಎಂಸಿಯವರು ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಿರುತ್ತಾರೆ. ಅಂತಹ ಶಾಲೆಗಳಲ್ಲಿ ಮಕ್ಕಳ ದಾಖಲಾತಿಯು ನಿರಂತರವಾಗಿ ಹೆಚ್ಚುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಸರ್ಕಾರಿ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸುವುದರಿಂದ ಮಕ್ಕಳ ದಾಖಲಾತಿ ಮತ್ತು ಗುಣಮಟ್ಟ ಹೆಚ್ಚಳವಾಗಲಿದೆ. ಈ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರಮಾಂಕ (1) ರ 2018-19ನೇ ಸಾಲಿನ (ಜುಲೈ) ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಯವರು ಈ ಕೆಳಕಂಡಂತೆ ಘೋಷಿಸಿರುತ್ತಾರೆ.

*"ಪ್ರಸ್ತುತ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಅಂಗನವಾಡಿ ಕೇಂದ್ರಗಳನ್ನು ಆಯ್ದ 4100 ಸರ್ಕಾರಿ ಪ್ರಾಥಮಿಕ ಶಾಲೆಗಳ ಆವರಣಕ್ಕೆ ಸ್ಥಳಾಂತರಿಸಿ 'ಬಾಲಸ್ನೇಹಿ ಕೇಂದ್ರ' ಗಳನ್ನಾಗಿ ಬಲವರ್ಧಿಸಲಾಗುವುದು. ಹಂತಹಂತವಾಗಿ ಕಾರ್ಯಸಾಧ್ಯತೆಯನುಸಾರ ಬೇರೆ ಸರ್ಕಾರಿ ಶಾಲೆಗಳಲ್ಲಿ ಸಹ LKG/UKG ತರಗತಿಗಳನ್ನು ಪ್ರಾರಂಭಿಸಲಾಗುವುದು. ಇದರಿಂದ ಸರ್ಕಾರಿ ಶಾಲೆಗಳಲ್ಲಿನ ದಾಖಲಾತಿ ಪ್ರಮಾಣವು ಹೆಚ್ಚಾಗುವುದರೊಂದಿಗೆ ಮಕ್ಕಳ ಕಲಿಕೆಯ ಗುಣಮಟ್ಟವನ್ನು ವೃದ್ಧಿಸಬಹುದಾಗಿದೆ.*

ಮೇಲೆ ಓದಲಾದ ಕ್ರಮಾಂಕ (2) ರ ಸರ್ಕಾರದ ಆದೇಶದಲ್ಲಿ, 2017-18ನೇ ಸಾಲಿನ ಆಯವ್ಯಯ ಘೋಷಣೆಯಂತೆ, ಒಂದೇ ಭೌಗೋಳಿಕ ಸ್ಥಳಗಳಲ್ಲಿ ಅಸ್ತಿತ್ವದಲ್ಲಿರುವ ಶಾಲೆಗಳನ್ನು ಆಡಳಿತಾತ್ಮಕ, ಶೈಕ್ಷಣಿಕ ಮತ್ತು ಕ್ರಿಯಾತ್ಮಕ ಸಂಯೋಜನೆಯೊಂದಿಗೆ ಒಟ್ಟುಗೂಡಿಸಿ, ತಾಲ್ಲೂಕಿಗೆ ಒಂದರಂತೆ ಗ್ರಾಮ ಪಂಚಾಯತ್ ಕೇಂದ್ರ ಸ್ಥಳಗಳಲ್ಲಿ 176 ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭಿಸಲಾಗಿರುತ್ತದೆ.

...2

ಮೇಲೆ ಓದಲಾದ ಕ್ರಮಾಂಕ(3) ರ ಸರ್ಕಾರದ ಆದೇಶದಲ್ಲಿ 100 ಕರ್ನಾಟಕ ಪಬ್ಲಿಕ್ ಶಾಲೆಗಳನ್ನು 2019-20ನೇ ಸಾಲಿನಿಂದ ಪ್ರಾರಂಭಿಸಲು ಅನುಮೋದನೆ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (4)ರ ನಡವಳಿಯಂತೆ, ಸರ್ಕಾರಿ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸುವ ಕುರಿತು ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪ್ರಾಯೋಗಿಕವಾಗಿ 2019-20ನೇ ಸಾಲಿನಲ್ಲಿ ಪೂರ್ವಪ್ರಾಥಮಿಕ ತರಗತಿಗಳನ್ನು 276 ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಪ್ರಾರಂಭಿಸಲು ತೀರ್ಮಾನಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (5) ರ ರಾಜ್ಯ ಯೋಜನಾ ನಿರ್ದೇಶಕರು, ಏಕ ಕಡತದಲ್ಲಿ ಯುನಿಸೆಫ್, ಹಾಗೂ ಅಜೀಂ ಪ್ರೇಂಜಿ ವಿಶ್ವವಿದ್ಯಾಲಯ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸೇರಿ ಅಂಗನವಾಡಿ ಪಠ್ಯಕ್ರಮ ಪರಿಷ್ಕರಿಸಲು ನಿಯೋಜಿಸಿರುವ ಸಮಿತಿ ಸದಸ್ಯರೊಂದಿಗೆ ಸಮಾಲೋಚಿಸಿ, ಅಂತಿಮಗೊಳಿಸಿದ ಪಠ್ಯಕ್ರಮದಂತೆ ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 111 ಯೋಯೋಕ 2018, ಬೆಂಗಳೂರು, ದಿನಾಂಕ:17.05.2019.**

ಪ್ರಸ್ತಾನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, 2019-20ನೇ ಸಾಲಿನಿಂದ ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪ್ರಾಯೋಗಿಕವಾಗಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಲು ಅನುಮತಿ ನೀಡಿ ಆದೇಶಿಸಿದೆ.

ಷರತ್ತುಗಳು:

1. ಪೂರ್ವ ಪ್ರಾಥಮಿಕದ ಒಂದು ವಿಭಾಗದಲ್ಲಿ 20 ರಿಂದ 30 ಮಕ್ಕಳನ್ನು ದಾಖಲಿಸತಕ್ಕದ್ದು.
2. ಯುನಿಸೆಫ್, ಅಜೀಂ ಪ್ರೇಂಜಿ ವಿಶ್ವವಿದ್ಯಾಲಯ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸೇರಿ ನಿಯೋಜಿಸಿರುವ ಸಮಿತಿಯ ಶಿಫಾರಸ್ಸಿನಂತೆ ಪೂರ್ವ ಪ್ರಾಥಮಿಕ ತರಗತಿಗಳಲ್ಲಿ ಬಳಸಬೇಕಾದ ಪಠ್ಯಕ್ರಮ, ಪಠ್ಯಪುಸ್ತಕ, ಬೋಧನೋಪಕರಣಗಳು ಮುಂತಾದವುಗಳ ತಯಾರಿಸಿ, ಶಿಕ್ಷಕರ ತರಬೇತಿಗೆ ಅಗತ್ಯವಿರುವ ತರಬೇತಿ ಸಂಚಿಯನ್ನು ಅಭಿವೃದ್ಧಿಪಡಿಸಿ ತರಬೇತಿಯನ್ನು ನೀಡುವುದು.
3. ಪೂರ್ವ ಪ್ರಾಥಮಿಕ ತರಗತಿಗಳಿಗೆ ಕನಿಷ್ಠ 3.5 ವರ್ಷ ಮೇಲ್ಪಟ್ಟ ವಯಸ್ಸಿನ ಮಕ್ಕಳನ್ನು ಮಾತ್ರ ದಾಖಲಿಸಿಕೊಳ್ಳತಕ್ಕದ್ದು.
4. ಪೂರ್ವ ಪ್ರಾಥಮಿಕ ತರಗತಿಗಳನ್ನು ಪೂರ್ವಾಹ್ನ 10.00 ರಿಂದ ಅಪರಾಹ್ನ3.30ರ ವರೆಗೆ ನಡೆಸತಕ್ಕದ್ದು.
5. ಪ್ರತಿ ಪೂರ್ವ ಪ್ರಾಥಮಿಕ ತರಗತಿಗೆ ಒಬ್ಬ ಶಿಕ್ಷಕಿ/ಶಿಕ್ಷಕ ಮತ್ತು ಒಬ್ಬರು ಆಯಾರನ್ನು ಸಮಗ್ರ ಶಿಕ್ಷಣ ಕರ್ನಾಟಕ ನಿಗಧಿಪಡಿಸುವ ಮಾನದಂಡಗಳಿಗೆ ಅನುಗುಣವಾಗಿ ಆಯಾ ಶಾಲಾ ಎಸ್.ಡಿ.ಎಂ.ಸಿ. ಯವರು ತಾತ್ಕಾಲಿಕವಾಗಿ 10 ತಿಂಗಳ ಅವಧಿಗೆ ನೇಮಕ ಮಾಡಿಕೊಳ್ಳತಕ್ಕದ್ದು.

...3

6. ಪೂರ್ವ ಪ್ರಾಥಮಿಕ ತರಗತಿಯ ಶಿಕ್ಷಕಿ/ಶಿಕ್ಷಕರಿಗೆ ಪ್ರಸ್ತುತ ಸರ್ಕಾರಿ ಶಾಲೆಗಳ ಅತಿಥಿ ಶಿಕ್ಷಕರಿಗೆ ನೀಡುತ್ತಿರುವ ಸಂಭಾವನೆಯಂತೆಯೇ ಮಾಸಿಕ ರೂ.7500 ಮತ್ತು ಆಯಾ ಇವರಿಗೆ ಮಾಸಿಕ ರೂ.5000 ಸಂಭಾವನೆಯನ್ನು ನೀಡುವುದು. ಈ ವೆಚ್ಚವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆಯಾಗುವ ಅತಿಥಿ ಶಿಕ್ಷಕರ ವೇತನ ಲೆಕ್ಕ ಶೀರ್ಷಿಕೆಯಿಂದ ಸೆಳೆದು ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ (ಎಸ್.ಡಿ.ಎಂ.ಸಿ) ಯವರಿಗೆ ನೇರವಾಗಿ ಬಿಡುಗಡೆ ಮಾಡತಕ್ಕದ್ದು.

7. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಕಚೇರಿಯಿಂದ ಸಂಬಂಧಿಸಿದ ಶಾಲಾ ಎಸ್.ಡಿ.ಎಂ.ಸಿ ಗಳಿಗೆ ಖಜಾನೆ-2 ರಲ್ಲಿ ಅನುದಾನ ಬಿಡುಗಡೆ ಮಾಡಲು ಸೂಕ್ತ ನೋಂದಣಿಗಳನ್ನು ಮಾಡಿಕೊಳ್ಳತಕ್ಕದ್ದು.

8. ಪೂರ್ವ ಪ್ರಾಥಮಿಕ ವಿಭಾಗದ ಮಕ್ಕಳಿಗೆ ಅಂಗನವಾಡಿಗಳಲ್ಲಿ ನೀಡುವ ಆಹಾರ ಘಟಕ ವೆಚ್ಚದಂತೆ ಹಾಲು, ಉಪಹಾರ ಮತ್ತು ಊಟ ಮೊದಲಾದ ಆಹಾರ ಸಾಮಗ್ರಿಗಳ ಪೂರೈಕೆ ಜವಾಬ್ದಾರಿಯನ್ನು ಸಹ ನಿರ್ದೇಶಕರು, ಮಧ್ಯಾಹ್ನ ಉಪಾಹಾರಯೋಜನೆ, ಬೆಂಗಳೂರು ಇವರು ನಿರ್ವಹಿಸತಕ್ಕದ್ದು.

9. ಮಕ್ಕಳ ಆರೋಗ್ಯ ತಪಾಸಣೆ ಮತ್ತು ನಿಯಮಿತ ಚುಚ್ಚುಮದ್ದುಗಳನ್ನು ನೀಡುವ ಬಗ್ಗೆ ಕರ್ನಾಟಕ ಪಬ್ಲಿಕ್ ಶಾಲೆಯ ಉಪ ಪ್ರಾಂಶುಪಾಲರು ಕ್ರಮವಹಿಸತಕ್ಕದ್ದು.

10. ಪೂರ್ವ ಪ್ರಾಥಮಿಕ ತರಗತಿಗಳಿಗೆ ಅಗತ್ಯವಿರುವ ವರ್ಗಕೋಣೆಗಳನ್ನು ಆಯಾ ಶಾಲೆಯಲ್ಲಿ ಲಭ್ಯವಿರುವ ಅನುದಾನ ಬಳಸಿಕೊಂಡು ಸಜ್ಜುಗೊಳಿಸತಕ್ಕದ್ದು.

11. ಪೂರ್ವ ಪ್ರಾಥಮಿಕ ಶಾಲಾ ಕೊಠಡಿ ನಿರ್ಮಾಣ/ದುರಸ್ತಿಗೆ ಅವಶ್ಯಕವಾದ ಅನುದಾನವನ್ನು ಶಾಲಾ ಕಟ್ಟಡಗಳ ನಿರ್ವಹಣೆ ಲೆಕ್ಕ ಶೀರ್ಷಿಕೆ:2202-01-053-0-01-200, ಪ್ರಾಥಮಿಕ ಶಾಲೆಗಳ ಕಟ್ಟಡ ನಿರ್ಮಾಣ ಶೀರ್ಷಿಕೆ:4202-01-201-1-04-059/422/423, ಅಡಿಯಲ್ಲಿ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಒದಗಿಸುವ ಅನುದಾನದಿಂದ ಬಳಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 792 ವೆಚ್ಚ-8 2018, ದಿನಾಂಕ:08.08.2018 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಯೋಇ 52 ಜಶ 2018, ದಿನಾಂಕ:06.08.2018 ರಲ್ಲಿ ನೀಡಿದ ಸಹಮತದನ್ವಯ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2019, ದಿನಾಂಕ:03.04.2019ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕರಾಜ್ಯಪಾಲರಆಜ್ಞಾನುಸಾರ
ಮತ್ತುಅವರ ಹೆಸರಿನಲ್ಲಿ

(ಎಸ್.ಆರ್.ಎಸ್.ನಾಥನ್) 7/5/19
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದಅಧೀನಕಾರ್ಯದರ್ಶಿ(ಯೋಜನೆ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ
17/5/19

ಇವರಿಗೆ:

1. ಮಹಾಲೇಖಪಾಲರು, (ಆಡಿಟ್ 1 & 2) ಕರ್ನಾಟಕ, ಬೆಂಗಳೂರು.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
3. ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು.

...4